


# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ಗುರುತಿನ ಪ್ರಶ್ನೆ

ದಿನಾಂಕ : 29-03-2021 ಪ್ರಶ್ನೆ ಸಂಖ್ಯೆ : 322 (2331+2386)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಹೆಚ್.ಎಂ. ರಮೇಶ ಗೌಡ (ವಿಧಾನಸಭೆಯಿಂದ ಚುನಾಯಿತರಾದವರು )

ಶ್ರೀ. ಪಿ.ಆರ್. ರಮೇಶ (ನಾಮನಿರ್ದೇಶನ ಹೊಂದಿದವರು)

ಉತ್ತರ ನೀಡಬೇಕಾದ ದಿನಾಂಕ : 29-03-2021

ಉತ್ತರಿಸುವ ಸಚಿವರು : ಕಾರ್ಮಿಕ ಸಚಿವರು

ವಿಷಯ : ರಾಜ್ಯದಲ್ಲಿ ಇರುವ ಸಂಘಟಿತ ಮತ್ತು ಅಸಂಘಟಿತ ಕಾರ್ಮಿಕರ ಕುರಿತು

(ಅ) ರಾಜ್ಯದಲ್ಲಿ ಸಂಘಟಿತ ಮತ್ತು ಅಸಂಘಟಿತ ಕಾರ್ಮಿಕರ ಸಂಖ್ಯೆ ಎಷ್ಟು; ಯಾವ ಯಾವ ಉದ್ಯಮಗಳಲ್ಲಿ ಎಷ್ಟು ಕಾರ್ಮಿಕರು ಕೆಲಸ ಮಾಡುತ್ತಿದ್ದಾರೆ; ಈ ಕುರಿತು ಸರ್ಕಾರದ ಬಳಿ ಅಂಕಿ ಅಂಶಗಳು ಲಭ್ಯವಿದೆಯೇ; ಇದ್ದಲ್ಲಿ, ಸರ್ಕಾರದ ದಾಖಲೆಗಳಲ್ಲಿ ಇರುವ ಸಂಖ್ಯೆ ಎಷ್ಟು; ಉದ್ಯೋಗಗಳಲ್ಲಿರುವ ಶೇಕಡಾವಾರು ಪಾಲು ಎಷ್ಟಿದೆ; (ವಿವರ ನೀಡುವುದು)

(ಆ) ರಾಜ್ಯದ ಯಾವ ಯಾವ ನಗರಗಳಲ್ಲಿ ಇ.ಎಸ್.ಐ. ಆಸ್ಪತ್ರೆಗಳಿವೆ; (ಅವುಗಳ ವಿವರ ನೀಡುವುದು)

(ಇ) ಸರ್ಕಾರವು ಕಾರ್ಮಿಕರಿಗೆ ನಿಗದಿಪಡಿಸಿರುವ ಮಾಸಿಕ ವೇತನ ಮತ್ತು ಇತರೆ ಭತ್ಯೆಗಳಾವುವು ; ಕೆಲಸ ನಿರ್ವಹಿಸುವ ಜಾಗದಲ್ಲಿ ಕಾರ್ಮಿಕರಿಗೆ ಅಪಘಾತವಾಗಿ ಅಂಗವಿಕಲತೆ ಅಥವಾ ಇತರೆ ಊನಗಳಾದಲ್ಲಿ ಇಂತಹ ಕಾರ್ಮಿಕರಿಗೆ ಸರ್ಕಾರ ಮತ್ತು ಉದ್ಯೋಗದಾತರು ನೀಡುವ ಪರಿಹಾರಗಳೇನು; (ವಿವರ ನೀಡುವುದು)

(ಈ) ಸರ್ಕಾರವು ಕಾರ್ಮಿಕರ ಶ್ರೇಯೋಭಿವೃದ್ಧಿಗಾಗಿ ಅನುಷ್ಠಾನಗೊಳಿಸಿರುವ ಯೋಜನೆಗಳು ಯಾವುವು, ಈ ಯೋಜನೆಗಳ ಮಾನದಂಡಗಳೇನು; ಈ ಯೋಜನೆಗಳಡಿ ರಾಜ್ಯದಲ್ಲಿ ಪ್ರಯೋಜನ ಪಡೆದಿರುವ ಕಾರ್ಮಿಕರ ಸಂಖ್ಯೆ ಎಷ್ಟು; (ತಾಲ್ಲೂಕುವಾರು ಮಾಹಿತಿ ನೀಡುವುದು)

(ಉ) ರಾಜ್ಯದಲ್ಲಿ ನಿರುದ್ಯೋಗ ಸಮಸ್ಯೆಯನ್ನು ನೀಗಿಸಲು ಸರ್ಕಾರ ಹಮ್ಮಿಕೊಂಡಿರುವ ಕಾರ್ಯಕ್ರಮಗಳು ಮತ್ತು ಯೋಜನೆಗಳು ಯಾವುವು; (ಮಾಹಿತಿ ನೀಡುವುದು)

(ಊ) ಕಳೆದ ನಾಲ್ಕು ವರ್ಷಗಳಿಂದ ರಾಜ್ಯದಲ್ಲಿ ಅತಿ ಸಣ್ಣ, ಮಧ್ಯಮ ಮತ್ತು ಬೃಹತ್ ಉದ್ದಿಮೆಗಳು/ಕೈಗಾರಿಕೆಗಳು ಮುಚ್ಚಿರುವ ಪರಿಣಾಮ ಒಟ್ಟು ಎಷ್ಟು ಸಂಖ್ಯೆಯ ಕಾರ್ಮಿಕರು ನಿರುದ್ಯೋಗಿಗಳಾಗಿರುತ್ತಾರೆ ; ಈ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರದ ಕ್ರಮವೇನು? (ರಾಜ್ಯದ ಮತ್ತು ಬೆಂಗಳೂರು ನಗರದ ಪ್ರತ್ಯೇಕ ಮಾಹಿತಿ ನೀಡುವುದು)